ಕರ್ನಾಟಕ ವಿಧಾನ ಪರಿಷತ್ತು

1). ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1890

2). ಸದಸ್ಯರ ಹೆಸರು : ಶ್ರೀ ಅಲ್ಲಂ ವೀರಭದ್ರಪ್ಪ (ವಿಧಾನಸಭೆಯಿಂದ ಚುನಾಯಿತರಾದವರು)

3). ಉತ್ತರಿಸುವ ದಿನಾಂಕ : 26.03.2020

4). ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | 2018-19ನೇ ಸಾಲಿನಲ್ಲಿ ಶಾಸಕರ ಪ್ರದೇಶಾಭಿವೃದ್ಧಿ ಯೋಜನೆ 4ನೇ ಕಂತಿನ ಬಂಡವಾಳ ವೆಚ್ಚದ ಅನುದಾನ ಬಿಡುಗಡೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಬಿಡುಗಡೆ ಮಾಡುವುದು ಯಾವಾಗ; | 2018-19ನೇ ಸಾಲಿನಲ್ಲಿ ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ 4ನೇ ಕಂತಿನ ಬಂಡವಾಳ ವೆಚ್ಚದಡಿ ಅನುದಾನ ಬಿಡುಗಡೆಯಾಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>2018-19ನೇ ಸಾಲಿನಲ್ಲಿ ಎಲ್ಲಾ ಸದಸ್ಯರುಗಳಿಗೆ ರೂ.481.69 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ.<br>ಜಿಲ್ಲಾಧಿಕಾರಿಗಳ ಉಳಿತಾಯ ಖಾತೆಯಲ್ಲಿ ಫೆಬ್ರುವರಿ-2019ರ ಅಂತ್ಯಕ್ಕೆ ಹೆಚ್ಚಿನ ಉಳಿಕೆ ಹಣ ರೂ.830.67 ಕೋಟಿಗಳು ಇದ್ದುದರಿಂದ, ಹಾಗೂ ಶೇಕಡ 75 ರಷ್ಟು ವೆಚ್ಚ ಭರಿಸಿದ ನಂತರ ಉಳಿಕೆ ಹಣವನ್ನು ಬಿಡುಗಡೆಗೊಳಿಸಲು ಆದೇಶವಿರುವುದರಿಂದ. ಸದರಿ ಉಳಿಕೆ ಅನುದಾನದಲ್ಲಿ ನಾಲ್ಕನೆಯ ಕಂತಿನ ಹಣದ ವೆಚ್ಚ ಭರಿಸಲು ತೊಂದರೆ ಇಲ್ಲಾವಾದರಿಂದ ಅನುದಾನವು ಸರ್ಕಾರದಿಂದ ಬಿಡುಗಡೆಯಾಗಿರುವುದಿಲ್ಲ. |
| (ಆ) | 4ನೇ ಕಂತಿನ ಬಂಡವಾಳ ವೆಚ್ಚದಡಿ ಮಂಜೂರಾದ ಕಾಮಗಾರಿಯನ್ನು ಅನುಷ್ಠಾನಗೊಳಿಸಬಹುದೆ; ಹಾಗಿದ್ದಲ್ಲಿ ಯಾವಾಗ ಅನುಷ್ಠಾನಗೊಳಿಸಲಾಗುವುದು; | 2018-19ನೇ ಸಾಲಿನಲ್ಲಿ ರೂ.2.00 ಕೋಟಿಗಳ ಅನುದಾನಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಿದ್ದಲ್ಲಿ 2019-20ನೇ ಸಾಲಿನಲ್ಲಿ ಆ ಕಾಮಗಾರಿಗಳು ಮುಂದುವರೆದ ಕಾಮಗಾರಿಗಳಾಗಿರುತ್ತದೆ. ಸದರಿ ಅನುದಾನವನ್ನು ಜಿಲ್ಲಾಧಿಕಾರಿಗಳ ಪಿ.ಡಿ.ಖಾತೆಯಿಂದ ಭರಿಸಲು ಮಾರ್ಗಸೂಚಿ ಇರುತ್ತದೆ. |

| | | |
|---|---|---|
| (ಇ) | 2018-19ನೇ ಸಾಲಿನಲ್ಲಿ ಈಗಾಗಲೇ ಪ್ರಸ್ತಾಪಿಸಿದ ಹಾಗೂ ಅನುಮೋದನೆಯಾಗಿರುವ ಕಾಮಗಾರಿಗಳನ್ನು ಮತ್ತು ರದ್ದು ಪಡಿಸಲಾದ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಸೂಚನೆಗಳನ್ನು ನೀಡಲಾಗಿದೆಯೇ; | 2018-19ನೇ ಸಾಲಿನಲ್ಲಿ ರೂ.2.00 ಕೋಟಿಗಳ ಅನುದಾನಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಿದ್ದಲ್ಲಿ 2019-20ನೇ ಸಾಲಿನಲ್ಲಿ ಆ ಕಾಮಗಾರಿಗಳು ಮುಂದುವರೆದ ಕಾಮಗಾರಿಗಳಾಗಿದ್ದರೆ ಸದರಿ ಅನುದಾನವನ್ನು ಜಿಲ್ಲಾಧಿಕಾರಿಗಳ ಪಿ.ಡಿ.ಖಾತೆಯಿಂದ ಭರಿಸಬಹುದಾಗಿದೆ.<br><br>ರದ್ದುಪಡಿಸಲಾದ ಕಾಮಗಾರಿಗಳನ್ನು ಅನುಷ್ಠಾನಿಸಲು ಅವಕಾಶವಿರುವುದಿಲ್ಲ. |
| (ಈ) | ಹಾಗಿದ್ದಲ್ಲಿ, ಸರ್ಕಾರವು ಸೂಚನೆಗಳನ್ನು ನೀಡಲು ಕ್ರಮ ವಹಿಸಲಾಗಿದೆಯೇ? | ರೂ.2.00 ಕೋಟಿಗಳ ಕ್ರಿಯಾ ಯೋಜನೆಯ ಕಾಮಗಾರಿಗಳನ್ನು ಪ್ರತಿ ವರ್ಷ ಜೂನ್ ಮಾಹೆಯೊಳಗೆ ಮಾನ್ಯ ಶಾಸಕರುಗಳಿಂದ ಪಡೆದು ನಿಯಮಾನುಸಾರ ಅನುಷ್ಠಾನಗೊಳಿಸಲು ಮಾರ್ಗಸೂಚಿಯಲ್ಲಿ ತಿಳಿಸಲಾಗಿರುತ್ತದೆ. |

ಸಂಖ್ಯೆ: ಪಿಡಿಎಸ್ 36 ಕೆಎಲ್ಎಸ್ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ),
ಮುಖ್ಯಮಂತ್ರಿ